# ಕರ್ನಾಟಕ ವಿಧಾನಸಭೆ

ಹದಿಮೂರನೇ ವಿಧಾನಸಭೆ

(ಹದಿಮೂರನೇ ಅಧಿವೇಶನ)

## ಕಾರ್ಯಕಲಾಪಗಳ ಪಟ್ಟಿ

ಸೋಮವಾರ, ದಿನಾಂಕ 26ನೇ ಮಾರ್ಚ್, 2012

(ಸಮಯ: ಬೆಳಿಗ್ಗೆ 11.00 ಗಂಟೆಗೆ)

- - -

### 1 . ಸಂತಾಪ ಸೂಚನೆ

### 2. ಪ್ರಶ್ನೋತ್ತರ

**ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಮೊದಲನೇ ಪಟ್ಟಿ**

**ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಮೊದಲನೇ ಪಟ್ಟಿ**

### 3. ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು

ಸದಸ್ಯರಿಗೆ ಈಗಾಗಲೇ ಪ್ರತ್ಯೇಕವಾಗಿ ಕಳುಹಿಸಲಾಗಿರುವ ಮೊದಲನೇ ಹಾಗೂ ಎರಡನೇ ಪಟ್ಟಿಯ ರೀತ್ಯಾ

### 4. ಕಾರ್ಯದರ್ಶಿಯವರ ವರದಿ

**ಕಾರ್ಯದರ್ಶಿ ಅವರು:-**

ಕಳೆದ ಅಧಿವೇಶನದಲ್ಲಿ ಒಪ್ಪಿಸಿದ ವರದಿಯ ನಂತರ ರಾಷ್ಟ್ರಾಧ್ಯಕ್ಷರು ಅಥವಾ ರಾಜ್ಯಪಾಲರಿಂದ ಸಂದರ್ಭಾನುಸಾರವಾಗಿ ಒಪ್ಪಿಗೆ ಪಡೆದ ವಿಧೇಯಕಗಳ ಪಟ್ಟಿಯನ್ನು ಸಭೆಯ ಮುಂದಿಡುವುದು.

### 5. ವರದಿಯನ್ನೊಪ್ಪಿಸುವುದು

ಶ್ರೀ ಬಿದರೂರು ಶ್ರೀಶೈಲಪ್ಪ ವಿರುಪಾಕ್ಷಪ್ಪ (ಅಧ್ಯಕ್ಷರು, ಸದನ ಸಮಿತಿ) ಅವರು:- ದಿನಾಂಕ:07.02.2012ರಂದು ನಡೆದ ಅಧಿವೇಶನದಲ್ಲಿ ಅಶ್ಲೀಲ ಚಿತ್ರಗಳನ್ನು ವೀಕ್ಷಿಸುತ್ತಿದ್ದರೆನ್ನಲಾದ ಪ್ರಕರಣದ ಬಗ್ಗೆ ಸ್ವತಂತ್ರವಾಗಿ ತನಿಖೆ ನಡೆಸಲು ರಚಿತವಾದ ಸದನ ಸಮಿತಿಯ ವರದಿಯನ್ನೊಪ್ಪಿಸುವುದು.

ಪು.ತಿ.ನೋ.

## 6. ಗಮನ ಸೆಳೆಯುವ ಸೂಚನೆಗಳು

1. ಶ್ರೀ ಯು.ಟಿ.ಖಾದರ್ ಅವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಿಶೇಷವಾಗಿ ಮಂಗಳೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಕುಡಿಯುವ ನೀರಿನ ಅಭಾವದ ಬಗ್ಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

**2.** ಶ್ರೀ ವಿ. ಮುನಿಯಪ್ಪ ಅವರು ಡಾ॥ ಪರಮಶಿವಯ್ಯ ವರದಿಗೆ ಅನುಗುಣವಾಗಿ "ಎನ್.ಆರ್.ಎಸ್.ಎ" ರವರ ತಾಂತ್ರಿಕ ತಜ್ಞರ ವರದಿಯಂತೆ ರಾಜ್ಯದ ಬಯಲು ಸೀಮೆ ಪ್ರದೇಶದ ತಾಲ್ಲೂಕುಗಳಿಗೆ ನೀರು ಒದಗಿಸುವ ಬಗ್ಗೆ ಭಾರೀ ಮತ್ತು ಮಧ್ಯಮ ನೀರಾವರಿ ಸಚಿವರ ಗಮನ ಸೆಳೆಯುವುದು.

## 7. ವಿತ್ತೀಯ ಕಾರ್ಯಕಲಾಪಗಳು

i) ಶ್ರೀ ಡಿ.ವಿ. ಸದಾನಂದ ಗೌಡ (ಮಾನ್ಯ ಮುಖ್ಯಮಂತ್ರಿಗಳು) ಅವರು 2011–12ನೇ ಸಾಲಿನ ಪೂರಕ ಅಂದಾಜುಗಳನ್ನು (ಮೂರನೇ ಹಾಗೂ ಅಂತಿಮ ಕಂತು)ಮಂಡಿಸುವುದು.

ii) 2011-12ನೇ ಸಾಲಿನ ಪೂರಕ ಅಂದಾಜುಗಳ ಕುರಿತು ಚರ್ಚೆ ಸರ್ಕಾರದ ಉತ್ತರ ಹಾಗೂ ಮತಕ್ಕೆ ಹಾಕುವುದು.

iii) 2012–13ನೇ ಸಾಲಿನ ಆಯವ್ಯಯದ ಮೇಲೆ ಸಾಮಾನ್ಯ ಚರ್ಚೆ.

## 8. ಶಾಸನ ರಚನೆ

### I ವಿಧೇಯಕವನ್ನು ಮಂಡಿಸುವುದು

**1) ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ)ವಿಧೇಯಕ, 2012**
**ಶ್ರೀ ಡಿ.ವಿ. ಸದಾನಂದ ಗೌಡ) (ಮುಖ್ಯಮಂತ್ರಿ) ಅವರು:–**

ಅ) 2012ನೇ ಸಾಲಿನ ಭೂ ಸುಧಾರಣೆಗಳ (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

## II. ವಿಧೇಯಕಗಳನ್ನು ಪರ್ಯಾಲೋಚಿಸುವುದು ಹಾಗೂ ಅಂಗೀಕರಿಸುವುದು

1) **ಕರ್ನಾಟಕ ಭೂ ಸುಧಾರಣೆಗಳ(ತಿದ್ದುಪಡಿ) ವಿಧೇಯಕ, 2012**
**ಶ್ರೀ ಡಿ.ವಿ. ಸದಾನಂದ ಗೌಡ) (ಮುಖ್ಯಮಂತ್ರಿ) ಅವರು:–**

ಅ) ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

2) **ಸಹ್ಯಾದ್ರಿ ಪರಂಪರೆ ಅಭಿವೃದ್ಧಿ ಪ್ರಾಧಿಕಾರ, ವಿಧೇಯಕ, 2011**
**ಶ್ರೀ ಗೋವಿಂದ ಎಂ ಕಾರಜೋಳ, (ಸಣ್ಣ ನೀರಾವರಿ, ಕನ್ನಡ ಮತ್ತು ಸಂಸ್ಕೃತಿ ಸಚಿವರು) ಅವರು:–**

ಅ) ಸಹ್ಯಾದ್ರಿ ಪರಂಪರೆ ಅಭಿವೃದ್ಧಿ ಪ್ರಾಧಿಕಾರ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**ಪಿ.ಓಂಪ್ರಕಾಶ**
ಕಾರ್ಯದರ್ಶಿ

*Raj N*

ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.
(www.kar.nic.in/kla)